# ರನ್ನ ನಿಘಂಟು

**ರನ್ನ ನಿಘಂಟು**

ಕುಳಿರೆನೆ ಶೈತ್ಯಂ ಮಿಳಿರೆನೆ
ಪೊಳೆದುದು ಬಿಲ್ಲೆಂದೆನಲ್ಕೆ ಮಾರಂಬರ್ಥಂ
ಬಳೆದು ದೆನಲ್ಕೆಱಿಗಿದುದುಂ
ಕಿಳಿರೆನೆ ವಾಜಿಯ ನಿನಾದಮೆಲೆ ಕವಿರತ್ನಾ||೧||

ಬರೆಯೆನಲತ್ಯರ್ಥಂ ಮುಂ
ಮುರಿಯೆನೆ ಕಾಸಿದ ಮಳಲ್ಕಕಿಳಂಗೆನೆ ಗೆಳಸಂ
ಮುರಿಪೆನೆ ಮರಳಿಭಾವಂ
ಸಿರಿವಂತಿಕೆಯೆಂದೆನಲ್ಕೆ ಹುರಿಯೋಡಕ್ಕುಂ|| ೨||

ಹಕ್ಕಿಯೆನಲ್ವಿಹಗಂ ನೆಱೆ
ಪಕ್ಕೆಯೆನಲ್ಪಾಸು ವುಂಡೆಯೆಂದೆನೆ ಮೊಳಕಾ
ಲ್ಮುಕ್ಕೆನೆ ಬೆಳ್ಳಕ್ಕಿಯೆ ತಾನೆ
ಕಿಕ್ಕೆನೆ ದಿಂಡುವಿಡಿದು ಬಪ್ಪುದು ದಕ್ಕುಂ ||೩||

ಬಲಗೆನೆ ಬಿಸುಡೆಂಬರ್ಥಂ
ಬಲಮರ್ದನೆ ಅಂಕದೌಷಧಂ ತಾನಕ್ಕುಂ
ಪೊಲಿಗೆನೆ ಬಿರ್ಚುಗೆಯೆ ತೆಱಂ
ಕೆಲಕನೆನಲ್ಕಿಕ್ಕುಮಲ್ಲ ನೆಲೆ ಕವಿರತ್ನಾ||೪||

ಅಂಚ ಮೆನಲ್ಕಂಜಿಕೆ ಯತಿ
ಬಂಚನೆಯೆನೆ ಮರಸಿಡಕ್ಕು ಬೆಳಕೆನೆ ದೀಪಂ
ಪೊಂಚೆನೆ ಪೊರ್ದಿದಬಗೆವಾ
ನೆಂಚಲೆನಲ್ಕೆಂಜಕಲಪ್ಪುದೆಲೆ ಕವಿರತ್ನಾ||೫||

ಸಣ್ಣದೆನಲ್ಕಿಱಿದಕ್ಕುಂ
ಪಣ್ಣೆನೆ ಮಾಡೆಂಬ ವಾಚಿ ಬಳಿಯೆನೆ ವಂಶಂ
ಎಣ್ಣೆನೆ ಲೆಕ್ಕಿಪುದುಂ ಬಿಸು
ಗಣ್ಣನೆನಲ್ಗೊರವನಪ್ಪನೆಲೆ ಕವಿರತ್ನಾ||೬||

ಕೋಸಿತೆನಲ್ಪೋಣಿಸಿದುದು
ಸೂಸಿದುದೆನೆ ತುಳ್ಕಿತೆಂಬುದುಂ ಪರಿಮಳಮುಂ
ಬಾಸತಮೆನೆ ಕಂಪು ಮಿಗೆ
ಸೌಸಾಸವಮೆನೆ ಸಮ್ಮದರ್ಥಮೆಲೆ ಕವಿರತ್ನಾ||೭||

ಸುಗಿಪವುಮೆನೆ ಸುಲಿಹಂ ತಾಂ
ತೆಗಳೆನೆ ಪೆಗಳುಳ್ಕ್ರಿತೆಂದೆನಲ್ವುದುಮಂ
ಬಗಸೆನೆ ಮನವಿಟ್ಟುದು ಮುಂ
ನಿಗಮದೆನಲ್ ದೊಡ್ಡಿತಪ್ಪುದೆಲೆ ಕವಿರತ್ನಾ॥೮॥

ಅಱಲೆನೆ ತಾರಗೆ ತಿಟ್ಟೆಂ
ದುಱಿ ಬಲ್ ಬೈಗುಳಿನಿಸು ನನಸೆಂದೆನೆ ದಿಟಮುಂ
ಗಱಿವೂವೆನೆ ಕೇದಗೆ ಪಡಿ
ಯಱವಕ್ಕಿಯೆನೆ ಯೆನಲ್ಕೆ ಕೋಕಿಲನಕ್ಕ॥೯॥

ಕೈವಟ್ಟಲ್ ಸಟ್ಟುಗೆಮುಡಿ
ಪೊಯಿವೆಕ್ಕಲ್ ಪೊಯಿಗಿಲಂ ಮಡಂತಳೆ ಜೋಳಂ
ಕೈವಲೆ ಕಣ್ಬಲೆ ಜಱಸುಳಿ
ಕೈಪಿಡಿಯೆಂಬುದನೆ ತಿಳಿಯೆ ಕಬ್ಬಿಗರರಸಾ॥೧೦॥

ಬಲಯರಮೆನೆ ತಲೆವಾಗಿಲು
ಕಲಗಲಮೆನೆ ಕೂಡಿ ಬೆರಸಿದಕ್ಕುಂ ನೈಲಂ
ಗಲರ್ಮೆನೆ ಚೆಲ್ವಿಕೆ ಸಲೆಸೈ
ಗೆಲರ್ಮೆನೆ ತಾಂ ಪುಣ್ಯಶಕ್ತಿಯೆಲೆ ಕವಿರತ್ನಾ॥೧೧॥

ತೋರ್ಪೆನೆ ಕಾಣ್ಕೆ ಮುಸುರ್ಪೆನೆ
ವಾರ್ಪೆನೆ ಕೈವಿಡಿದುದಕ್ಕುಮಿಳಿಪೆನೆ ಸೋಲಂ
ಕೂರ್ಪೆನೆ ನಿಲುವೆರಗೆನೆ ಮೋ
ಲಾರ್ಪೆನೆ ಸುಸ್ನಪಮಪ್ಪುದೆಲೇ ಕವಿರತ್ನಾ॥೧೨॥

ಊರೂಪೆನೆ ಕೀಲಿಸಿದುದ್ಯೆ ಕ
ಣ್ಣಾರ್ಪೆನೆ ನೋಮ್ಪಿಜ್ಜುಗಂ ಮಿಳಿರ್ಪೆನೆ ಮುರಿಪಂ
ಕಾರ್ಪೊಱಿಯೆನೆ ಮಳೆಗಾಲಂ
ನೇರ್ಪೊಱಿಯೆನೆ ಅಱಿಮೆ ಯೆಳೇ ಯಲೆ ಕವಿರತ್ನಾ॥೧೩॥

ಭಂಡಣಮೆನೆ ಪುಯ್ಯಲ್ವಲ
ಬಂಡೆನೆ ಜೇನ್ ಪೆರಬಳಿಯೆನೆ ಪೆರಬಳಿಯನೆಂದೆನೆ ಪಾಣ್ಬಂ
ಗುಂಡೆನೆ ನೆರವಿ ತುಳಿಲ್ವಱಿ
ಗೊಂಡೆನೆ ನಲ್ವೀರರಸನೆಲೇ ಕವಿರತ್ನಾ॥೧೪॥

ಎಱಿಯಱಿಯಂ ತೊಳ
ಪಱಿವಱಿವಂ ಸಗ್ಗಿಗರ ಪಿರಿಯನುರೆ ಬಳಿಗಂ ಪಾ
ಲಱಕಿಲುಣಿವಕ್ಕೆದಱಂ
ನಿಱುಬಱಿಗಂ ಪೊನ್ನಬಸುಱನೆಲೆ ಬಿದಿ ರತ್ನಾ॥೧೫॥

ವೃ॥ ಮುಗಿಲಲರೇಱಿದ ಸಿರಿಮಗಂ ನೆಲೆವೆಣ್ಣರ ಸಂನೆಲಕ್ಕರಂ
ಬಗೆದಿಳಿಗಂ ಮರ್ದುರ್ ಬಲಿಗ ನಚ್ಚರಮೊರ್ಮೊದಲೋದಿಗಂ ಸುಳುಂ
ಬೆಗಡಱಿಗಂ ಸೊಗಂಬೊಱೆಗನೆಚ್ಚರವಾಳಿಗ ವಾಳವಾಳಿಗಂ
ತೆಗಲುಡೆಗಂ ಪೊಗಳ್ಪುಡಿಗನೆಂದೆನೆ ನೀಂ ತಿಳಿ ಬೊಮ್ಮನೆಂಬುದಂ॥೧೬॥

ಸೋಂಪುವೆಱೆ ಯಿಂಪುಗಳೆವಲಿ
ಗಂಪುಳಿಲಿಗೆ ಯುಣಿಸು ಸಾಸದಡಿ ಕಿಂ
ಲ್ಗಂ ಪಿಡಿಕೆ ಬೆವತುಳಿರ್ವಡಿ
ಗುಂಪೆನೆತಿಳಿ ಕೈಪೆವರನೆನಿಪ್ಪುದು ರತ್ನಾ ॥೧೭॥

ಅಱಿಯಮೆಯಿದೆಯ ಸೊಂಪುಸೆದೆಯ
ಪೊಱಗೆಳೆಯಳ ಬೇಟ ದಾಣದೊರೆ ಕಣ್ಣೆತ್ತುಪ
ಲ್ಗುಱಿ ಪಸಡಿಕೊಲ್ಗೆಬನವೆ
ಣ್ಗುಱಿಪೆನಾಂ ನೆಲ್ಲಿ ಮರನೆನಿಪ್ಪುದು ರತ್ನಾ ॥೧೮॥

ತಳಿರ್ಗಣೆನ ಬಲ್ವಸದಿಯ
ಬಳಿಗೆವಱೆಗೆ ಬಳಸಿ ನಱಿಕೆ ಇಂಗೋಲಿರ್ಪಿನಂ
ಗೆಳೆಮುಗಿಲೆಳ್ದೊಱೆಯೆಂದೆನೆ
ತಿಳಕಬ್ಬೆಂದೆಯ್ದೆ ಬೆಳ್ಳಿವೆಸರಾಂತವನೇ॥೧೯॥

ಸಾಸವದೊಟ್ಟಿಲ್ತೆಲ್ಲಡಿ
ಬಾನರ್ಪಣೆವಕ್ಕಿವಾಡಮಗಲಿದರೆಡೆ ಕಂ
ಣ್ಬಾಸ್ಪಣಿಕೆನೆಲನಬೆಟ್ಟೊ
ಳ್ಬಾಸಟಿ ತಣ್ಬುಳಿಲೆನಿಪುದೆಲೇ ಕವಿರತ್ನಾ॥೨೦॥

ಮಱುನೆಲೆ ಸಾಸವದಾಣಂ
ನಿಱುಬೆಳಗೆನೆ ಬಾಯಕೆಂಪು ಮೊಗಸಿರಿ ಪೊರ್ದಿಂ
ಗರಕೆಯರಲಂಬ ನೆರವಿಗೆ
ತುಱುಗಿಪ್ಪೆನೆ ತಿಳಿಗೆ ವೀಳೆಯಂ ಕವಿರತ್ನಾ॥೨೧॥

ತೊಳ್ಗಿದನೆನೆ ಪೊಡವಟ್ಟಂ
ಗಿಳ್ಗಿದನೆನೆ ಗಿಡ್ಡನವಿಳನೆಂದೆನೆ  ಕುಱುಬಂ
ಪುಳ್ಗಿದನೆನೆ ಕುಱುಬಂ ತಳ
ವಳ್ಗಿದನೆನೆ ಬೆಡಗುಗೊಂಡವಂ ಕವಿರತ್ನಾ॥೨೨॥

ದೋಷವಿನಿತೆಳಸದಿರು ನೀಂ
ಲೇಸಾಗಿರೆ ಪೇಳ್ದ ಕನ್ನಡಂಗಳ ತಿಳಿಯಲ್
ಕಾಮರಮಪಿಡಿದೊಡಾವಂ
ಮಾಸಱಿಸುಳಿನಿಟ್ಟಿಸದೊಡೆನೇಸರ್ಗಿಳಿದೆ ॥೨೩॥

ಬೆಳಾಯಲ್ಕುಡು ಬೆಳಗ
ಲ್ತೆಳಾಱವು ಬೆಳಸು ಮೊದಲನೋಟಮೆನಲ್ಕಿಂ
ಚುಳಾ ಬಲ್ ಬಸದಿಯ ಬಗೆ
ಗುಳ್ಳಾಗಲ್ ನೈದಲಱಿಗೆ ನೀಂ ಕವಿರತ್ನಾ ||೨೪||

ಮುಗಿಲರಲೊಗೆಗೈಗೂಟಂ
ಬಗೆದೊಱೆ ಪಾಲೋಱೆಗೆ ತಕ್ಕಗೆ ನೆಯೊಳ್ದಾವರೆ
ಮುಗುಳೆಂದಱಿ ನೆಗಳ್ದವೆನೆ
ಮಿಗೆ ಜಾಜಿಯ ಬೆಳ್ಪಿಗೂರ್ತವೆಸರಾಂತವನೇ||೨೫||

ಗೊರ್ಬನೆ ಗಂಭೀರಂ ಪಱೆ
ಪರ್ಬಿದುದೆನೆ ಬಳ್ಳಿವರಿದುದಕ್ಕುಂ ದೈತ್ಯಂ
ಮರ್ಬುಸುಳಿಕಾರರೆನೆ ಪೊಳೆ
ದುರ್ಬನೆ ಸಿಡಿಲಪ್ಪುದಮಲ ನಿಜ ಕವಿರತ್ನಾ ||೨೬||

ಝುಳಮೆಂದೆನಲುಷ್ಣಂ ಬಾ
ಗುಳಮೆಂದೆನೆ ದುಃಖಮಲ್ಲಣೆಕೆಯೆನೆ ಮೇಳಂ
ಪಳಗೆಂದೆನೆ ಒಣಗಿದಯೆಲೆ
ಮಳಗೆನೆ ಬಿಟ್ಟಿಯ ಬಟ್ಟಗಸಿಲೆನೆ ಶಂಖಂ||೨೭||

ಬದ್ದರನೆನೆ ಬದುಕಿದಪಂ
ಕದ್ದರನೆನೆ ಕಳ್ಳನೆದ್ದರೆನಲೋಡಿದಪಂ
ಬಿದ್ದಿಗನೆನೆ ನಂಟಂ ಕೈ
ಗುದ್ದಿಗರೆನೆ ಮಲ್ಲರೆಂಬುದೆಲೆ ಕವಿರತ್ನಾ||೨೭||

ವೃ|| ಬೆಳವರವಿಂಪು ಜಾಗಿಲ ಗಿಳಿರ್ಪೊಡೆ ಇಂಗಲೆಯೂನ್ಮದಾವಳಿ
ಗಯುಗಲ್ದಿರಾಳ್ದವನೆ ಪೂಚರಬಲ್ಲಿ ಇಸಾಜೆನ್ನೈಲವೆಚ್ಚುರ್ಗ
ಗಳೊಗೆದಾರೋಮಾಂಪನೆ ಗೊಲ್ಲೊಗ್ಗನೆವೇಟದ ನೀಱಮೆಂದೆನ
ಲ್ಕಳೆಯದ ಕಾಣ್ಕೆ ಮಲ್ಲಿಗೆಯೆನಿಪ್ಪದ ಬೆಳ್ಪೆಸರ್ಗೆ ತಕ್ಕನೇ||೨೯||

ಚಲ್ಲದ ನೆಲೆ ಇಲ್ಲದ ಮುಳಿ
ಸೊಲ್ಲದ ಬಗೆಯಱಿಕೆ ಬೆಲ್ಲ ಬಳಿ ಬಲ್ಲರ ಸೋಂ
ಕಲ್ಲರಗೆಲವಲ್ಲದ ನುಡಿ
ಸೊಲ್ಲದು ಪೂವಿಲ್ಲಡಿರೆನಿಪ್ಪದು ರನ್ನಾ ||೩೦||

ಸಿರಿಯೊಗೆದಾಣಂ ನೈಲಂ
ಬರೆ ಬಣ್ಣೊಗ್ಗಿಡಿ ಪುಟ್ಟು ಬಾನ್ವರುಣೆ ಸಿಂಗಡಲೆ
ಚ್ಚಱ ಬಗೆಯರಮೊಗಸಚ್ಚರ
ದಿರಿಯೆನೆ ಪಯಸಾಬ್ಧಿ ಬೆಳ್ಪೆಸರಾಂತವನೇ ||೩೧||

ಕಾಯಿ ಪಣ್ಣುದಾಣಮಿಳಿಪಿನ
ತಾಯಿ ಪೊಳೆನಿರೊಟ್ಟಿನಿಲ್ಗೆ ಬಿಸುಡಿ ಬೆಕ್ಕಂ
ಜಾಯಿಪು ಸೋಡಮ್ರ್ಯಂಗಾಣ್ಕೆ
ಲಾಯಿಪುದೆ ಝುಳವಾಳ್ಕೆ ಪೆರಳುರ್ವಿಧಿ ರನ್ನಾ ।।೩೨।।

ನವಿಲರಗಾರ್ತಿಯನಡೆದೊಳೆ
ಸವಿಯುಳಿಮ್ಮೆಗೊಡುವಕ್ಕಿ ಮೆಲ್ಲದಿ ಬೆಳ್ಗಂಚ
ವಲುವಸುಸರನೆ ಇಲ್ವಳಸುವ
ಗಿಳಿಎನಲಂಚೆ ಬೆಳ್ಳಿವೆಸರಾಂತವನೇ।।೩೩।।

ಸಬಬಾಸನೆಯಿಪ್ರೊಡೆ ಸೆ
ಸಬೆಯದ ಪೂನ್ನೈಲಬಗ್ಗು ಬಿಳಿಗ್ಗಿನ ಬೆಳಗಿಂ
ಪುಬಸನೆ ಬಾನ್ವಳಿಯರಕಂ
ಣ್ಗಬಲೆ ತಿಳಿ ಎನೆ ದೇವಭೂರುಹಂ ಕವಿರತ್ನಾ।।೩೪।।

ಸೊಗಬಳಿಗಿ ಸುಪುವರರ್ಗೆ
ಬಗಸೊಲಪಿಗೆ ನೈಲಸಿರಿಗೆ ಮೆಲ್ಲಡಿ ಬೊರೆ
ಇಗೆ ತಗದಳ ಸೆಬಿವಿಗೆ ಕಣ್ಬೆರ
ಲೊಗೆ ಬಸನಿಯೆನಲ್ಕೆ ಲಲನೆಯರ್ ಕವಿರತ್ನಾ।।೩೫।।

ಬಳಿಗೆಲಯೆಂ ಬದಗಂ ನಾ
ಳ್ಗಿಳಿವಾಡಂ ನನ್ನಿಡಿಗಳನುಳಿಗಂತಳೆಗಂ
ಸಳಿಬೊಳೆಗಳಿಯಿಂ ಸಾಜುಳಿ
ಗೆಳೆಯನೆನಲ್ಲಗ್ಗನುಳಿದನೆಲೆ ಕವಿರತ್ನಾ।।೩೬।।

ನೆಲಬಲಲಂ ನಿಜಿ ಬೆಳಲಂ
ಬಲಸೊಲಹಂ ಬಚ್ಚಬಣೆಸೆ ಬಲ್ವಣೆವಾದಂ
ಪೊಲಗೆ ಸುಸಿಲ್ವೆಳಗಿಲಿ ಬಾ
ಳ್ತೊಲೆಗೆಲೆಯುಣೆಸಾರ್ಕೆಯ ಸೊಕೆಯೆಲೆ ಕವಿರತ್ನಾ ।।೩೭।।

ಕೊನರ್ವಿಡಿ ಸುಳಿದಾಳ್ಕೈಲಂ
ಗೊನೆ ನುಣ್ಪಸು ಗಾಣ್ಕೆ ಬಗಸುನಿಲೆ ಬಂಬಲ್ವಾ
ಲ್ವನೆ ನೈಲಸರಿಗೆ ಪಾರ್ದೆಂ
ದೆನೆ ತಿಳಿನಿಂಪಚ್ಚದೆನೆಯೆನಿಪ್ಪುದು ರತ್ನಾ।।೩೮।।

ಮೀನ್ನೃಣ್ರನದಳೆಯಿಂಗೈ
ಬಾನಂ ಬೊಪವರ್ಗಲುಣೆಸು ಕಂಡೆರ್ದೆಬಾಳ್ ನೀ
ವುಂ ನಾಣ್ಕೆಯ ಕೊಲ್ಲಾಲ್ವೆಳೆ
ತಾನೆನೆ ಬೆಳ್ದಿಂಗಳೆಂಬುದಬಲೆ ಕವಿರತ್ನಾ ।।೩೯।।

ಆಲೆನ ಬಲ್ಸರವಲಗಲ
ವಾಲಿಂಗಳಲೆಂದು ಪಕ್ಕೆವನೆ ಬಿಲ್ಲೆರಂ
ಕೋಲಾಂಕೆ ತಾನೆನಲ್ ಮಱು
ಗೋಲೆನೆ ಬಿಲ್ಲಾರಿಯೆಂಬುದಂ ತಿಳಿರತ್ನಾ ॥೪೦॥

ಸೂಡಗುರೆ ಸೆಕ್ಕೆ ಬೆಂಗೊನೆ
ಗೂಡಳಱಲ್ ಸುಳಿಬೆದರ್ಚು ಪೆಱೆ ಬೆಂಗಿ
ಳ್ಗೊಡೆ ಮುಟ್ಟಱಮೆಕಳಲಡಿ
ವಾಡೆನೆ ಬಿಂಗೆಯೆಂಬುದುಂ ತಿಳಿರತ್ನಾ ॥೪೧॥

ವೃ॥ಮಿಳಿರೆಲೆ ಪೋಪ ರಾಣ್ಮನಱವಟ್ಟಿಗರಿಚ್ಚೆಗನೆಣ್ಬುವಾಡಿಗಂ
ಪೊಳಱಿಕೆಯಿಲ್ಲದಂ ಸವಲನೆಚ್ಚಱಮೆಯಱನೈಲವಳ್ಕಿಗಂ
ಝಳವಿಲಿಗಂ ಮಿಳಿರ್ಲಲನೆಂದೆವನಲಿಂದ್ರನ ರಂಚು ತುಳ್ತುಗಂ
ಪಿಳಿವಳಿಗೋಲನೆಂದೆನೆ ಖಲಂ ಬಗೆ ಸಾಸವ ಚನ್ನವಾಳವಾಳ್
ಕುಳಿರಲೆ ವಟ್ಟೆದೋರ್ಕೆ ಮಗಳೆಂದೆನೆ ಮುನ್ನಱ ಗೌರಿಯೆಂಬುದಂ ॥೪೨॥

ಪೆಱಗೆ ಬಳಕ್ಕಯೆಸುರ್ಪಡೆ
ಯಱದಳೆಮಗುಳಳತೆ ಕಾಣ್ಬೆ ಇಂನಡೆ
ನೆಱದಾಳಳರಳಿಕೆ ಪೊಳ್ತುಳದಿಕೆಯೆಂ
ದಱಗೊಳ್ಮಲ್ತಂದು ಬೆಳ್ವೆಸರಾಂತವನೇ ॥೪೩॥

ಪೊತ್ತಿಕ್ಕೆನೆ ಪೊರೆದಾಳ್ದಿಹ
ರುತ್ತಿಕ್ಕೆನೆ ಕೂಡೆ ಬಾಳ್ದಪರ್ ಪೊಱಪಾಳುಂ
ಪತ್ತಿಕ್ಕೆನೆ ಸಾರ್ದಪರೆಂ
ಬುತ್ತಿಯ ನೀಂ ತಿಳಿಯೋ ಬೆಳ್ವೆಸರಾಂತವನೇ ॥೪೪॥

ಸುಳಿವಳಿಸಾರೆ ಗಾಲ್ಸರನ ನಾಳ್ಕೆಯ ಕಣ್ಬಸೆನ್ಕೆಲಿದೋಱು ಪೆ
ಚಳಗೆಱಯೆಂದೆನಲ್ಧ್ಯನದಿ ಕೇಳ್ಕೆನಿರ್ದುಂಬಳ ಸೊಲ್ದೆಬಣಂಣಂ
ಕುಳಿರೆ ದೆಕ್ಕೆಲನಣ್ಣಗರೆ ತಿಂಗಳವಟ್ಟರೆ ॥೪೫॥

ವಿಶೇಷ ಕೃತಜ್ಞತೆಗಳು,

ಸಂಪಾದಕರು:
ಪ್ರೊ॥ ಹಂಪ ನಾಗರಾಜಯ್ಯ,
ಪ್ರಕಾಶಕರು: ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.